# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು–ಭಾಗ–2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀವೇಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ:

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,

ತಿ. ತಿ. ದೇ. ತಿರುಪತಿ.

"ಪ್ರತಿಯೊಬ್ಬರೂ ತಮ್ಮ ತಮ್ಮ ವರ್ಣಾಶ್ರಮ ಧರ್ಮಕ್ಕೆ ಅನುಸಾರವಾಗಿ ಧನಸಂಗ್ರಹ ಮಾಡುವುದು ಅವಶ್ಯಕ. ಅದನ್ನು ಪಡೆದ ಮೇಲೆ ಶಾಸ್ತ್ರಗಳ ವಿಧಿಗೆ ಅನುಸಾರವಾಗಿ ಅದನ್ನು ಸತ್ಪಾತ್ರರಿಗೆ ದಾನ ಮಾಡಬೇಕು. ಪ್ರತಿಯೊಬ್ಬರೂ ಸತ್ಯ, ಸರಳತೆ, ತಪಸ್ಸು, ದಾನ ಹಾಗೂ ದಯೆಗಳಿಂದ ಸದಾ ಕೂಡಿರಬೇಕು. ಅರಿಷಡ್ವರ್ಗಗಳನ್ನು ಪರಿತ್ಯಾಗಮಾಡಿ ಶಾಸ್ತ್ರೋಕ್ತ ಕರ್ಮಗಳನ್ನು ತಮ್ಮ ತಮ್ಮ ಶಕ್ತಿಗೆ ಅನುಸಾರವಾಗಿ ಪ್ರತಿದಿನವೂ ಶ್ರದ್ಧಾ ಪೂರ್ವಕವಾಗಿ ಅನುಷ್ಠಾನ ಮಾಡುತ್ತಿರಬೇಕು. ಹೀಗೆ ನಡೆದುಕೊಂಡಿದ್ದೇ ಆದರೆ ಮಾನವನೂ ತನ್ನ ತನ್ನ ವರ್ಣದಲ್ಲಿ ವಿಹಿತವಾದ ಉತ್ತಮ ಲೋಕಗಳನ್ನು ಪಡೆಯುವನು.

"ಎಲೈ ಪತಿವ್ರತಾಶಿರೋಮಣಿಯೆ! ಈ ರೀತಿಯಲ್ಲಿ ಮಹಾನ್ ಕ್ಲೇಶಗಳನ್ನು ಅನುಭವಿಸಿದ ನಂತರ ಪುರುಷರಿಗೆ ಪ್ರಜಾಪತ್ಯ ಇತ್ಯಾದಿ ಪರಲೋಕಗಳು ಪ್ರಾಪ್ತವಾಗುವುವು. ಆದರೆ ಸ್ತ್ರೀಯರು ಪತಿಯ ಸೇವೆ ಮಾಡಿದ ಮಾತ್ರದಿಂದಲೇನೆ ಪುರುಷರು ದುಃಖಗಳನ್ನು ಸಹಿಸಿ ಸಂಪಾದಿಸಿರುವ ಪುಣ್ಯದ ಅರ್ಧಭಾಗವನ್ನು ಪಡೆದಿರುತ್ತಾರೆ. ಸ್ತ್ರೀಯರು ತಮಗಾಗಿಯೇ ಪ್ರತ್ಯೇಕವಾದ ಯಜ್ಞ, ಶ್ರಾದ್ಧ, ಉಪವಾಸಗಳನ್ನು ಮಾಡಬೇಕಾದ ಅಗತ್ಯವಿಲ್ಲ. ಅವರು ಪತಿಯ ಸೇವೆ ಮಾಡುವಷ್ಟರಿಂದಲೇನೆ ತಮ್ಮ ಅಭೀಷ್ಟ ಲೋಕಗಳನ್ನು ಪಡೆಯುವರು. ಆದುದರಿಂದ ಎಲೌ ಮಹಾಭಾಗೆ! ನೀನು ಪತಿಯ ಸೇವೆಯಲ್ಲಿ ಸದಾ ಮನಸ್ಸನ್ನು ಕೇಂದ್ರೀಕರಿಸುವುದು ಅವಶ್ಯಕ. ಏಕೆಂದರೆ ಸ್ತ್ರೀಯರಿಗೆ ಪತಿಯೇ ಪರಮಗತಿ. ಪತಿಯು ದೇವತೆಗಳ ಪಿತೃಗಳ ಹಾಗೂ ಅತಿಥಿಗಳಿಗೆ ಮಾಡಿದ ಸತ್ಕಾರ, ಪೂಜೆಯ ಪುಣ್ಯದ ಅರ್ಧಭಾಗವು ಅನನ್ಯ ಚಿತ್ತದಿಂದ, ಶ್ರದ್ಧಾ ಪೂರ್ವಕವಾಗಿ ಪತಿಯ ಸೇವೆ ಮಾಡಿ, ಆತನ ಮನಸ್ಸನ್ನು ಸಂತೋಷ ಪಡಿಸುವುದರಿಂದ ಪ್ರಾಪ್ತವಾಗುತ್ತದೆ. ಇದಕ್ಕೆ ಆಧಾರ ಈ ಶ್ಲೋಕಗಳು.

ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ
ನ ಶ್ರಾದ್ಧಂ ನಾಪ್ಯುಪೋಷಿತಮ್ ।
ಭರ್ತೃಶುಶ್ರೂಷಯೈವೈತಾನ್
ಲೋಕಾನಿಷ್ಟಾನ್ ವ್ರಜಂತಿ ಹಿ ॥ ೧ ॥
ತಸ್ಮಾತ್ ಸಾಧ್ವಿ ಮಹಾಭಾಗೇ
ಪತಿಶುಶ್ರೂಷಣಂ ಪ್ರತಿ ।
ತ್ವಯಾ ಮತಿಃ ಸದಾ ಕಾರ್ಯಾ
ಯತೋ ಭರ್ತಾ ಪರಾ ಗತಿಃ ॥ ೨ ॥
ಯದ್ದೇವೇಭ್ಯೋ ಯಚ್ಚ ಪಿತ್ರಾಗತೇಭ್ಯಃ
ಕಾರ್ಯಾದ್ಭರ್ತ್ರಾ ಭ್ಯರ್ಚನಂ ಸತ್ಕ್ರಿಯಾತಃ ।
ತಸ್ಯಾಪ್ಯರ್ಧಂ ಕೇವಲಾನನ್ಯಚಿತ್ತಾ ನಾರೀ
ಭುಂಕ್ತೇ ಭರ್ತೃಶುಶ್ರೂಷಯೈವ ॥ ೩ ॥

ಅನಸೂಯಳು ಈ ಮಾತುಗಳನ್ನು ಆಲಿಸಿ ಪತಿವ್ರತಾ ಶಾಂಡಿಲಿಯು ಸಂತೋಷಗೊಂಡಳು. ನಂತರ ಹೇಳಿದಳು,

"ಎಲ್ಲರಿಗೂ ಒಳ್ಳೆಯದನ್ನೇ ಮಾಡುವ ದೇವಿ! ತಾವೇ ಸ್ವತಃ ಇಲ್ಲಿಯವರೆಗೆ ದಯಮಾಡಿಸಿ. ಪತಿಸೇವೆ ಮಾಡುವುದರ ಪ್ರಾಮುಖ್ಯತೆಯನ್ನು ವಿವರಿಸಿ ನನಗೆ ಅದರಲ್ಲಿದ್ದ ಶ್ರದ್ಧೆಯನ್ನು ಹೆಚ್ಚುವಂತೆ ಮಾಡಿದಿರಿ. ನಾನು ಇದರಿಂದ ಧನ್ಯಳಾದೆ. ತಾವು ನನ್ನ ಮೇಲೆ ಮಾಡಿದ ಮಹಾನ್ ಅನುಗ್ರಹ. ಇದರಿಂದ ದೇವತೆಗಳೂ ಕೂಡ ನನ್ನ ಮೇಲೆ ಕೃಪಾದೃಷ್ಟಿ ಬೀರುವಂತಾಯಿತು. ಪತಿಯ ವಿನಹ ಬೇರೆ ದೇವರೇ ಇಲ್ಲ ಭಾರತೀಯ ಸ್ತ್ರೀಗೆ— ಎಂಬ ವಿಷಯ ನನಗೆ ಚೆನ್ನಾಗಿ ಗೊತ್ತು. ಇದರಿಂದ ಇಹಲೋಕ, ಪರಲೋಕಗಳಲ್ಲಿ ಸದ್ಗತಿ ಪ್ರಾಪ್ತವಾಗುತ್ತದೆ

"ಮಹನೀಯಳೆ! ಪತಿಯ ಪ್ರಸಾದ ಹಾಗೂ ಪ್ರೇಮಗಳಿಂದಲೇ ಸ್ತ್ರೀಯು ಈ ಲೋಕ, ಪರಲೋಕಗಳಲ್ಲಿ ಸುಖ, ಸಂತೋಷಗಳನ್ನು ಪಡೆಯುವಳು. ಕಾರಣ ಸ್ತ್ರೀಗೆ ಪತಿಯೇ ಪ್ರತ್ಯಕ್ಷ ದೈವ.

"ಮಹಾಭಾಗೆ! ತಾವು ನನ್ನ ಮನೆಗೆ ದಯಮಾಡಿಸಿರುವಿರಿ. ನನ್ನಿಂದಲಾಗಲಿ, ನನ್ನ ಪತಿದೇವರಿಂದಲಾಗಲಿ ಏನಾದರೂ ಕಾರ್ಯವಾಗಬೇಕಾದಲ್ಲಿ, ಕೃಪೆ ಮಾಡಿ ತಿಳಿಸಿ."

ಇದನ್ನು ಆಲಿಸಿದ ಅನಸೂಯಾದೇವಿಯು ಹೇಳಿದಳು,

"ದೇವಿ! ನಿನ್ನ ಮಾತಿನಿಂದ ಹಗಲು–ರಾತ್ರಿಗಳ ಪರಿಕ್ರಮವು ನಿಂತುಹೋಗಿದೆ. ಈ ವ್ಯವಸ್ಥೆಯು ಲೋಪವಾದ ಕಾರಣ ಶುಭಕಾರ್ಯಗಳ ಅನುಷ್ಠಾನವು ಸಾಧ್ಯವಿಲ್ಲವಾಗಿದೆ. ಇದರ ಪರಿಣಾಮವಾಗಿ ಯಜ್ಞ ಕಾರ್ಯಗಳು ನಿಂತುಹೋಗಿವೆ. ಹಗಲು ಇಲ್ಲದಿದ್ದಲ್ಲಿ ಎಲ್ಲ ಶುಭ ಕಾರ್ಯಗಳೂ ನಾಶವಾಗುವುವು. ಇದರಿಂದ ಪ್ರಪಂಚದಲ್ಲಿ ಧರ್ಮಾಧರ್ಮದ ಏರುಪೇರಾಗುವುದು. ಈ ಅಪಾಯಗಳಿಂದ ಜಗತ್ತನ್ನು ಪಾರು ಮಾಡುವುದಕ್ಕಾಗಿ ಇಂದ್ರಾದಿ ದೇವತೆಗಳು ನನ್ನ ಬಳಿಗೆ ಬಂದು ಹಗಲು–ರಾತ್ರಿಗಳು ಎಂದಿನಂತೆಯೆ ಉಂಟಾಗಲಿ ಎಂದು ನಿನ್ನನ್ನು ಪ್ರಾರ್ಥಿಸುವಂತೆ ನನಗೆ ತಿಳಿಸಿದ್ದಾರೆ. ಆದುದರಿಂದ ದೇವಿ, ದಯೆ ತೋರಿ, ಎಲ್ಲ ಲೋಕಗಳನ್ನೂ ರಕ್ಷಿಸು. ಮೊದಲಿನಂತೆಯೆ ಹಗಲು – ರಾತ್ರಿಗಳಾಗುವಂತೆ ಅನುಗ್ರಹಿಸು..."

"ಮಹಾಭಾಗೆ! ಮಾಂಡವ್ಯ ಋಷಿಯು ಅತ್ಯಂತ ಕೋಪದಲ್ಲಿ ನನ್ನ ಸ್ವಾಮಿಯನ್ನು, ನನ್ನ ದೇವರನ್ನು, ಸೂರ್ಯೋದಯವಾಗುತ್ತಿದ್ದಂತೆಯೆ ಮರಣಿಸುವಂತೆ ಶಾಪ ನೀಡಿರುವರಲ್ಲ ... ಏನು ಮಾಡಲಿ ?" ಶಾಂಡಿಲಿಯು ಹೇಳಿದಳು.

"ದೇವಿ! ನೀನು ಇಷ್ಟಪಟ್ಟರೆ ನಿನ್ನ ಪತಿಯನ್ನು ಉತ್ತಮ ಆರೋಗ್ಯ ಉಳ್ಳವನನ್ನಾಗಿ ಬದಲಾಯಿಸಬಲ್ಲೆ. ಪತಿವ್ರತಾ ಸ್ತ್ರೀಯರ ಮಹಾತ್ಮೆಯ ಬಗ್ಗೆ ನಾನು ಯಾವಾಗಲೂ ಆದರ ಉಳ್ಳವಳಾಗಿರುತ್ತೇನೆ. ನಿನ್ನ ನಿಜವಾದ ಅಭಿಪ್ರಾಯವನ್ನು ಹೇಳು!"

"ಹಾಗೆಯೇ ಮಾಡಿ, ನಿಮ್ಮ ಇಷ್ಟದಂತೆಯೆ ಆಗಲಿ."

ಎಂದ ಕೂಡಲೆ ತಪಸ್ವಿನಿ ಅನಸೂಯಳು ಕೈಯಲ್ಲಿ ಅರ್ಘ್ಯವನ್ನು ತೆಗೆದುಕೊಂಡು ಸೂರ್ಯದೇವನನ್ನು ಆವಾಹಿಸಿದಳು. ಆ ಸಮಯಕ್ಕಾಗಲೆ ಹತ್ತು ಹಗಲು–ರಾತ್ರಿಗಳು ಕಳೆದುಹೋಗಿದ್ದುವು. ಅದು ಹತ್ತನೆಯ ರಾತ್ರಿ ಮುಗಿದ ಸಮಯವಾದುದರಿಂದ ಸೂರ್ಯಭಗವಾನನು ಅರಳಿದ ಕಮಲದಂತೆ ಅರುಣಾಕೃತಿಯನ್ನು ಧರಿಸಿ, ಉದಯಿಸಿದನು.

ಸೂರ್ಯನು ಕಾಣಿಸಿಕೊಂಡ ಕೂಡಲೆ ಶಾಂಡಿಲಿಯ ಪತಿಯು ಗತಪ್ರಾಣನಾಗಿ ನೆಲದ ಮೇಲೆ ಉರುಳಿದ. ಶಾಂಡಿಲಿಯು ಪತಿಯ ದೇಹವನ್ನು ನೆಲದ ಮೇಲೆ ಬೀಳದಂತೆ, ತಡೆದು, ಹಿಡಿದುಕೊಂಡಳು. ಆಗ ಅನಸೂಯಾದೇವಿಯು ಹೇಳಿದಳು.

"ಭದ್ರೆ! ನೀನು ದುಃಖಗೊಳ್ಳದಿರು. ಪತಿಯ ಸೇವೆಯಿಂದ ನಾನು ಪಡೆದಿರುವ ತಪೋಬಲದ ಪ್ರಭಾವವನ್ನು ನೀನೀಗ ನೋಡು,

ಯಥಾ ಭರ್ತೃಸಮಂ ನಾನ್ಯಮಹಂ
ಪಶ್ಯಾಮಿ ಪುರುಷಂ ಕ್ವಚಿತ್ ।
ರೂಪತಃ ಶೀಲತೋ ಬುದ್ಧ್ಯಾ
ವಾಙ್ಮಾಧುರ್ಯಾದಿ ಭೂಷಣೈಃ ॥

ರೂಪ, ಶೀಲ, ಬುದ್ಧಿ ಹಾಗೂ ಮಧುರ ಸಂಭಾಷಣೆ–ಎನ್ನುವ ಸದ್ಗುಣಗಳನ್ನು ನನ್ನ ಪತಿಯ ವಿನಹ ಬೇರೆ ಯಾವ ಪುರುಷನಲ್ಲಿಯೂ ನಾನು ಕಂಡಿಲ್ಲ.

ತೇನ ಸತ್ಯೇನ ವಿಪ್ರೋಽಯಂ
ವ್ಯಾಧಿಮುಕ್ತಃ ಪುನರ್ಯುವಾ ।
ಪ್ರಾಪ್ನೋತು ಜೀವಿತಂ ಭಾರ್ಯಾ
ಸಹಾಯಃ ಶರದಾಂ ಶತಮ್ ॥

ಆ ಸತ್ಯದ ಪ್ರಭಾವದಿಂದ ಈ ಬ್ರಾಹ್ಮಣನು ರೋಗ ಮುಕ್ತನಾಗಲಿ. ಮತ್ತೆ ತರುಣನಾಗಲಿ. ತನ್ನ ಪತ್ನಿಯೊಂದಿಗೆ ನೂರು ವರ್ಷಗಳವರೆಗೆ ಸುಖ ಜೀವನ ನಡೆಸಲಿ.

ಯಥಾ ಭರ್ತ್ರ್ ಸಮಂ ನಾನ್ಯಮಹಂ
ಪಶ್ಯಾಮಿ ದೈವತಮ್ ।
ತೇನ ಸತ್ಯೇನ ವಿಪ್ರೋಽಯಂ ಪುನರ್ಜಾಽವತ್ವ
ನಾಮಯಃ ॥

ಬೇರೆ ದೇವ, ದೇವರುಗಳಿಗಿಂತ ನನ್ನ ಪತಿಯನ್ನು ಹೆಚ್ಚೆಂದು ಭಾವಿಸಿದಲ್ಲಿ, ಆ ಸತ್ಯದ ಪ್ರಭಾವದಿಂದ ಈ ಬ್ರಾಹ್ಮಣನು ರೋಗಮುಕ್ತನಾಗಿ, ಜೀವಂತನಾಗಿ ಬಾಳಲಿ.

ಕರ್ಮಣಾ ಮನಸಾ ವಾಚಾ
ಭರ್ತ್ರಾರಾಧನಂ ಪ್ರತಿ ।
ಯಥಾ ಮಮೋದ್ಯಮೊ ನಿತ್ಯಂ
ತಥಾಽಯಂ ಜೀವಿತಂ ದ್ವಿಜಃ ॥

ನನ್ನ ಮನಸ್ಸು, ವಚನ, ಕ್ರಿಯೆಗಳ ಮುಖಾಂತರ ನನ್ನೆಲ್ಲ ಕಾರ್ಯಗಳು ನನ್ನ ಪತಿಯ ಸೇವೆಗೆ ಮೀಸಲಾಗಿದ್ದಲ್ಲಿ ಈ ಬ್ರಾಹ್ಮಣನು ಜೀವಂತನಾಗಲಿ."

ಅನಸೂಯಾದೇವಿಯ ಇಷ್ಟು ಹೇಳಿದ ಕೂಡಲೆ ಆ ಬ್ರಾಹ್ಮಣನು ರೋಗಮುಕ್ತನಾಗಿ, ತಾರುಣ್ಯವನ್ನು ಪಡೆದು, ಆ ಪ್ರದೇಶವನ್ನೆಲ್ಲ ಕಾಂತಿಮಯವನ್ನಾಗಿ ಮಾಡಿದನು. ಅವನು ಜರಾವಸ್ಥೆಯಿಂದ ದೂರವಾದ ದೇವತೆಯಂತೆ ಕಂಡುಬಂದನು.

ಆ ನಂತರದಲ್ಲಿ ಕೌಶಿಕ ಹಾಗೂ ಶಾಂಡಿಲಿ ಇವರುಗಳು ಅನೇಕ ವರ್ಷಗಳವರೆಗೆ ಸುಖ ಹಾಗೂ ಧಾರ್ಮಿಕ ಜೀವನವನ್ನು ನಡೆಸಿದರು.

(ಆಧಾರಗಳಿಂದ)

★



(10ನೇ ಪುಟದಿಂದ)

ಬಳಸಿರುವ 'ಜೀಯ' 'ವಿಶ್ವವಲ್ಲಭ' ಪದಗಳು ದಾಸರ ಶರಣತೆ, ಗಣಪತಿಯ ಒಡೆಯತನದಲ್ಲಿ ದಾಸ-ಭಗವಂತನಲ್ಲಿ ಸಮರ್ಪಣೆಯಾಗುತ್ತದೆ.

ಪಾರ್ವತಿಯನ್ನು ಸ್ತುತಿಸಿದ ಪ್ರಾರ್ಥನೆಯೊಂದರಲ್ಲಿ ಆಕೆಯನ್ನು ಕುರಿತು

ಖ್ಯಾತ ವೇದಾಗಮಾತೀತೆ ಸರ್ವರ
ಮನಃ।
ಪ್ರೀತೆ ಷಣ್ಮುಖ ವಿನಾಯಕರ॥
ಮಾತೆ ದನುಜಕುಲಭೀತೆ ತುಹಿನಗಿರಿ ।
ಜಾತೆ ಕೊಡೆನಗೆ ಸನ್ಮತಿಯ ॥

ವೇದ ಆಗಮಗಳಿಗೂ ನಿಲುಕದ, ಎಲ್ಲರೂ ಮನಃಪೂರ್ವಕವಾಗಿ ಸ್ತುತಿಸುವ ಪಾರ್ವತಿ ಷಣ್ಮುಖ-ವಿನಾಯಕರ ತಾಯಿ ಎಂಬುದಾಗಿ ತಿಳಿಸಿ, ಮಕ್ಕಳ ಶ್ರೇಷ್ಠತೆಯಿಂದ ತಾಯಿಯ ಹಿರಿಮೆಯನ್ನು ಗುರುತಿಸಿ ದಾಸರು ನಮಸ್ಕರಿಸುವುದನ್ನು ಗಮನಿಸಬಹುದಾಗಿದೆ.

ಕನಕದಾಸರು ಗಣೇಶನನ್ನು ಸ್ತುತಿಸಿದ ಕೀರ್ತನೆ, ಪದ್ಯಗಳು ಹೃದಯ ಸ್ಪರ್ಶಿಯಾಗಿದ್ದು, ಭಕ್ತಿ ಭಾವಗಳು ಪುಟಿದೇಳುತ್ತ ಸಮರ್ಪಣಾ ಭಾವದಲ್ಲಿ ಭಕ್ತ ಭಗವಂತನಲ್ಲಿ ಸೇರುವ ತತ್ತ್ವ ಅಡಗಿದೆ. ದಾಸರ ಸುಂದರವಾದ ಶಬ್ದಗಳ ಪದಗಳ ಲಾಲಿತ್ಯ ಪ್ರಾಸ-ಅನುಪ್ರಾಸಗಳಿಂದ ದೇಸಿಯ ಚೆಲುವಿನ ಸೊಬಗಿನಿಂದ ಗಣೇಶನನ್ನು ಅಲಂಕರಿಸಿ, ಭಕ್ತಿಯ ಕೀರ್ತನೆಗಳಿಂದ ಆರಾಧಿಸಿದ್ದಾರೆ.

"ಸತ್ಕೃಪೆಯ ಜೀಯ ಕಾರುಣ್ಯದಿ ಕಂಡು" ಅನುಗ್ರಹಿಸುವಂತೆ ಕನಕದಾಸರು ಆರ್ತಿಸಿ-ಸ್ತುತಿಸಿದ್ದಾರೆ. ಮಣ್ಣಿನಿಂದಲೆ ಹುಟ್ಟಿದ ಮಣ್ಣಿನ ಮಗ ಗಣಪನಿಗೆ - ಈ ಮಣ್ಣಿನ ಮಕ್ಕಳ ದೇಸಿಯ ಚೆಲುವಿ ಕೀರ್ತನೆ ಪ್ರಿಯವಾಗುವುದರಲ್ಲಿ ಸಂದೇಹವೆಲ್ಲಿದೆ?

*

# ಮರವಂತೆ ಮಾರಸ್ವಾಮಿ ದೇವಾಲಯ

ದಕ್ಷಿಣ ಕನ್ನಡ ಜಿಲ್ಲೆಯ ಮರವಂತೆ ಸೃಷ್ಟಿ ಸೌಂದರ್ಯದ ಬೀಡು. ಒಂದು ಕಡೆ ಭೋರ್ಗರೆಯುವ ಅರಬ್ಬೀ ಸಮುದ್ರ, ಇನ್ನೊಂದು ಕಡೆ ಪ್ರಶಾಂತವಾಗಿ ಹರಿಯುವ ಸೌವರ್ಣಿನದಿ ಮತ್ತು ಅದರ ಹಿನ್ನೆಲೆಯಲ್ಲಿ ತೋರುವ ಸಹ್ಯಾದ್ರಿಯ ಸೊಬಗು, ಇವೆಲ್ಲಾ ಇಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಒಂದು ಕಳೆಯನ್ನು ಇತ್ತಿವೆ. ಇಷ್ಟಲ್ಲದೆ ಈ ಮರವಂತೆ ಕನ್ನಡ ಕರಾವಳಿಯ ವರಹಾಸ್ವಾಮಿಯ ಆರಾಧನಾಕೇಂದ್ರವಾಗಿದೆ. ಈ ವರಾಹಸ್ವಾಮಿ ದೇವಾಲಯ ಮಂಗಳೂರಿನಿಂದ 111 ಕಿ. ಮೀ. ಉತ್ತರಕ್ಕೆ ಇದೆ. ಸೌವರ್ಣಿ ನದಿಯ ದಡದಲ್ಲಿರುವ ಈ ದೇವಾಲಯದ ಸ್ವಲ್ಪ ದೂರದಲ್ಲೇ ಅರಬ್ಬೀ ಸಮುದ್ರವಿದೆ. ಗಂಗಾಧರೇಶ್ವರ ದೇವಾಲಯ ವರಾಹಸ್ವಾಮಿ ದೇವಾಲಯದ ಉತ್ತರಕ್ಕಿದೆ. ಮಾರಸ್ವಾಮಿ ಎಂದು ಜನರಿಂದ ಕರೆಯಲ್ಪಡುವ ಈ ವರಾಹಸ್ವಾಮಿ ದೇವಾಲಯದ ಸನ್ನಿವೇಶ, ದಣಿದ ಪ್ರಯಾಣಿಕರ ಮನಸ್ಸನ್ನು ಆಹ್ಲಾದಗೊಳಿಸುತ್ತದೆ, ಈ ದೇವಾಲಯದಲ್ಲಿ ಮೂರು ಗರ್ಭಗೃಹಗಳಿದ್ದು ಈ ಮೂರರಲ್ಲಿ ವಿಷ್ಣುವಿನ ಅವತಾರವಾದ ವರಾಹ, (ಹಂದಿರೂಪ) ವಿಷ್ಣು (ಜನಾರ್ದನ) ಮತ್ತು ನರಸಿಂಹರ ಆರಾಧನೆ, ಭಕ್ತಿಯಿಂದ ಆಗಮ ಶಾಸ್ತ್ರದಂತೆ ನಡೆಯುತ್ತದೆ. (ದಕ್ಷಿಣದಿಂದ ಉತ್ತರಕ್ಕೆ) ಈ ದೇವಾಲಯದ ಎದುರು ತೀರ್ಥಮಂಟಪ ಮತ್ತು ಬಲಿಕಲ್ಲಿವೆ. ಇವುಗಳ ರಚನೆಗಳು ವಿಜಯನಗರ ಅರಸರ ಕಾಲಕ್ಕೆ ಸರಿಹೊಂದುತ್ತವೆ. ಈ ವರಹಸ್ವಾಮಿ ಮಳೆ ಮತ್ತು ಬೆಳೆಯನ್ನು ಸಕಾಲದಲ್ಲಿ ಕೊಟ್ಟು ಸಮೃದ್ಧಿಯನ್ನೀಯುವ ದೇವತೆಯೆಂದು ಸ್ಥಳೀಯ ಜನರು ಭಕ್ತಿಯಿಂದ ನಂಬಿಕೊಂಡು ಬಂದಿರುತ್ತಾರೆ. ಇಲ್ಲಿ ಮಳೆ ಸಕಾಲದಲ್ಲಿ ಬಾರದಿದ್ದಾಗ ಊರಿನ ಮತ್ತು ಆಸುಪಾಸಿನ ಜನರು ಭಕ್ತಿಯಿಂದ ಈ ದೇವಾಲಯಕ್ಕೆ ಬಂದು ಪ್ರಾರ್ಥನೆ ಮತ್ತು ಹರಕೆ ಸಲ್ಲಿಸಿದಾಗ ಮಳೆ ಬಂದು ಬೆಳೆ ಉತ್ತಮವಾಗುತ್ತದೆ. ಈ ದೇವಾಲಯದ ಪಶ್ಚಿಮದಲ್ಲಿರುವ ಸಮುದ್ರ ಪವಿತ್ರವೆಂದೂ ಮತ್ತು ಇಲ್ಲಿನ ಸ್ನಾನ ಪುಣ್ಯಕೆಲಸವೆಂದು ತಿಳಿದ ಜನರು ಕರ್ಕಾಟಕ ಅಮಾವಾಸ್ಯೆಯಲ್ಲಿ ಸಮುದ್ರಸ್ನಾನ ಮಾಡುತ್ತಾರೆ. ಈ ದಿವಸ ಈ ದೇವಾಲಯದಲ್ಲಿ ವಿಶೇಷ ಪೂಜೆ ನಡೆಯುತ್ತದೆ.

## ದೇವಾಲಯ ಮತ್ತು ಪರಿಸರ ಇತಿಹಾಸ :

ಕನ್ನಡ ಕರಾವಳಿಯಲ್ಲಿ ವರಾಹ ಆರಾಧನೆಯ ಏಕಮೇವ ಸ್ಥಳವಾದ ಮಾರಸ್ವಾಮಿಯ ಇತಿಹಾಸ ಕುತೂಹಲಕರವಾಗಿದೆ. ಇಲ್ಲಿ ಜನಜನಿತ ಕಥೆಯಂತೆ ಈ ದೇವಾಲಯ ಕುಂಬಳೆಯ ಕದಂಬ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಕಲಿಯುಗದ ಪ್ರಥಮ ಪಾದದಲ್ಲಿ 3,300 ವರ್ಷ ಕಳೆಯುವ ಶುಕ್ಲ ಸಂವತ್ಸರದ ಉತ್ತರಾಯಣ ವಸಂತಋತು ವೈಶಾಖ ಶುದ್ಧ ತದಿಗೆ ಗುರುವಾರ ಬೆಳಗ್ಗೆ ಬ್ರಾಹ್ಮಣರನ್ನು ಕೂಡಿಕೊಂಡು ಆಗಮ ವಿಧಿ ಪ್ರಕಾರ ವರಾಹ ವಿಷ್ಣು (ಜನಾರ್ಧನ) ಮತ್ತು ನರಸಿಂಹ ವಿಗ್ರಹಗಳನ್ನು ಕದಂಬ ಅರಸರು ಇಲ್ಲಿ ಪ್ರತಿಷ್ಠಾಪಿಸಿದರಂತೆ. ಈ ಜನಜನಿತ ಇತಿಹಾಸದಿಂದ ತಿಳಿದು ಬರುವ ಮುಖ್ಯ ಸಂಗತಿ ಏನೆಂದರೆ ಈ ದೇವಾಲಯದ ಸ್ಥಾಪನೆಯಲ್ಲಿ ದಕ್ಷಿಣದ ಅರಸರ ಪಾತ್ರವಿದ್ದಿತು. ಇಷ್ಟಲ್ಲದೆ ಈ ದೇವಾಲಯದ ಕೀರ್ತಿ ಕುಂಬಳೆಯವರೆಗೆ ಹಬ್ಬಿತು. ಕುಂಬಳೆ ಅರಸರು ಇತಿಹಾಸದಲ್ಲಿ ಬೆಳಕಿಗೆ ಬರುವುದು ಹತ್ತನೆ ಶತಮಾನದಲ್ಲಿ. ದೇವಾಲಯದ ವಾಸ್ತುಶಿಲ್ಪಗಳನ್ನು ಅಧ್ಯಯನ ಮಾಡಿದಾಗ ಈ ದೇವಾಲಯ ಹನ್ನೊಂದನೇ ಶತಮಾನ ಅಥವಾ ಹನ್ನೆರಡನೇ ಶತಮಾನದ ಆದಿಯಲ್ಲಿ ರಚಿತವಾದಂತೆ ತೋರುತ್ತದೆ. ಈ ದೇವಾಲಯದಲ್ಲಿ ಪೂಜಾವಿನಿಯೋಗಕ್ಕೆ ಗದ್ದೆಗಳನ್ನು ದತ್ತಿಬಿಟ್ಟದ್ದನ್ನು ತಿಳಿಸುವ ಶಾಸನ ಇದೆಯಾದರೂ ಇದು ಯಾವ ಕಾಲದಲ್ಲಿ ಮತ್ತು ಯಾರು ದತ್ತಿಬಿಟ್ಟದ್ದು ಎಂದು ತಿಳಿಸಲು ಅಸಮರ್ಪಕವಾಗಿದೆ. ಶಾಸನದ ಬರಹ ಹದಿಮೂರನೇ ಶತಮಾನಕ್ಕೆ ಸರಿಹೊಂದುತ್ತದೆ.

ಡಾ॥ ಕೆ. ಜಿ. ವಸಂತಮಾಧವ

ಈ ದೇವಾಲಯದ ವರಾಹ ದೇವತೆ ವಿಜಯನಗರ ಅರಸರ ಆಳ್ವಿಕೆಯಲ್ಲಿ ಹೆಚ್ಚು ಪ್ರಾಧಾನ್ಯಗಳಿಸಿತು. ಕ್ರಿ. ಶ. 1424 ರ ಗುಜ್ಜಾಡಿಯ ಗುಹೇಶ್ವರದ ತಾಮ್ರಶಾಸನದ ಪ್ರತಿಯಲ್ಲಿ ಈ ದೇವತೆಯ ಉಲ್ಲೇಖವಿದೆ. ಆಗಿನ ಕಾಲದಲ್ಲಿ ವರಾಹ ವೈಷ್ಣವದೇವತೆ ಬಹಳ ಕಾರಣೀಕವಾಗಿತ್ತು. ಹದಿನೈದನೇ ಶತಮಾನದ ಮಧ್ಯಾವಧಿಯಲ್ಲಿ ಮಹಾರಾಜಸ್ವಾಮಿ (ವರಾಹಸ್ವಾಮಿ) ದೇವಾಲಯ ಹಾದುವಳ್ಳಿಯ ಸಾಳ್ವರ ಆಳ್ವಿಕೆಗೆ ಒಳಪಟ್ಟಿದೆಯೆಂದು ಬೈಂದೂರಿನ ಪಾರ್ಶ್ವನಾಥ ಬಸದಿ ಮತ್ತು ಶನೈಶ್ವರ ದೇವಾಲಯಗಳ ಶಾಸನಗಳಿಂದ ತಿಳಿದು ಬರುತ್ತದೆ. ಜೈನಮತಾವಲಂಬಿಯಾದ ಈ ಸಾಳ್ವರು ಈ ವರಾಹಸ್ವಾಮಿಯನ್ನು ಭಕ್ತಿಯಿಂದ ಗೌರವಿಸುತ್ತಿದ್ದರು. ಇಲ್ಲಿನ ಪೂಜಾ ವಿನಿಯೋಗಗಳಿಗೆ ಯಾವ ತೊಂದರೆ ಬಾರದಂತೆ ಈ ಅರಸು ಮನೆತನದವರು ನೋಡಿಕೊಂಡಿದ್ದರು. ವರಾಹನೇ ವಿಷ್ಣುವಿನ ಅವತಾರದ ಕಲ್ಪನೆ ಎಂಬ ವಿಷಯವು ಬಹಳ ಪ್ರಸಿದ್ಧಿಗೆ ಬಂದಿತು. ಈ ಅರಸು ಮನೆತನದ ಶಾಸನಗಳಲ್ಲಿ ವರಾಹದ ಸ್ತುತಿ ಇದೆ.

ಕ್ರಿ. ಶ 16ನೇ ಶತಮಾನದ ಆದಿಭಾಗದಲ್ಲಿ ಪೋರ್ಚುಗೀಸರು ಕನ್ನಡ ಕರಾವಳಿಗೆ ವ್ಯಾಪಾರಸ್ಥರಾಗಿ ಬಂದರು. ಸೌವರ್ಣಿ ಹೊಳೆ ಮತ್ತು ಸಮುದ್ರದ ಪಕ್ಕದಲ್ಲಿರುವ ಈ ದೇವಾಲಯದ ಸಂಪತ್ತಿನ ಮೇಲೆ ಪೋರ್ಚುಗೀಸರ ಕಾಕದೃಷ್ಟಿ ಬಿತ್ತು. ಕೊಲೆ,

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ಮ. 1–00 | ಸಂ6–00 |
| | ರಾ 7–00 | ರಾ 8–45 |
| ಏಕಾಂತಸೇವೆ. | | ರಾ 9–00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ವಾತ್ಸರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | " | 40–00 |
| 3. | ಪುಳಿಯೋಗರೆ | " | 50–00 |
| 4. | ಪೊಂಗಲು | " | 55–00 |
| 5. | ಸಕ್ಕರಪೊಂಗಲ್ | " | 65–00 |
| 6. | ಶಾಕರ ಭಾತ್ | " | 85–00 |
| 7. | ಕೇಸರೀ ಭಾತ್ | " | 90–00 |
| 8. | ಸೀರ | " | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಆ ಸತ್ಯದ ಪ್ರಭಾವದಿಂದ ಈ ಬ್ರಾಹ್ಮಣನು ರೋಗ ಮುಕ್ತನಾಗಲಿ. ಮತ್ತೆ ತರುಣನಾಗಲಿ. ತನ್ನ ಪತ್ನಿಯೊಂದಿಗೆ ನೂರು ವರ್ಷಗಳವರೆಗೆ ಸುಖ ಜೀವನ ನಡೆಸಲಿ.

ಯಥಾ ಭರ್ತ್ರಾ ಸಮಂ ಸಾನ್ಯಮಹಂ
ಪಶ್ಯಾಮಿ ದೈವತಮ್ ।
ತೇನ ಸತ್ಯೇನ ವಿಪ್ರೋಽಯಂ ಪುನರ್ಜೀವತ್ವ
ನಾಮಯಃ ॥

ಬೇರೆ ದೇವ, ದೇವರುಗಳಿಗಿಂತ ನನ್ನ ಪತಿಯನ್ನು ಹೆಚ್ಚೆಂದು ಭಾವಿಸಿದಲ್ಲಿ, ಆ ಸತ್ಯದ ಪ್ರಭಾವದಿಂದ ಈ ಬ್ರಾಹ್ಮಣನು ರೋಗಮುಕ್ತನಾಗಿ, ಜೀವಂತನಾಗಿ ಬಾಳಲಿ.

ಕರ್ಮಣಾ ಮನಸಾ ವಾಚಾ
ಭರ್ತ್ರಾರಾಧನಂ ಪ್ರತಿ ।
ಯಥಾ ಮಮೋದ್ಯಮೊ ನಿತ್ಯಂ
ತಥಾಽಯಂ ಜೀವಿತಂ ದ್ವಿಜಃ ॥

ನನ್ನ ಮನಸ್ಸು, ವಚನ, ಕ್ರಿಯೆಗಳ ಮುಖಾಂತರ ನನ್ನೆಲ್ಲ ಕಾರ್ಯಗಳು ನನ್ನ ಪತಿಯ ಸೇವೆಗೆ ಮೀಸಲಾಗಿದ್ದಲ್ಲಿ ಈ ಬ್ರಾಹ್ಮಣನು ಜೀವಂತನಾಗಲಿ."

ಅನಸೂಯಾದೇವಿಯ ಇಷ್ಟು ಹೇಳಿದ ಕೂಡಲೆ ಆ ಬ್ರಾಹ್ಮಣನು ರೋಗಮುಕ್ತನಾಗಿ, ತಾರುಣ್ಯವನ್ನು ಪಡೆದು, ಆ ಪ್ರದೇಶವನ್ನೆಲ್ಲ ಕಾಂತಿಮಯವನ್ನಾಗಿ ಮಾಡಿದನು. ಆವನು ಜರಾವಸ್ಥೆಯಿಂದ ದೂರವಾದ ದೇವತೆಯಂತೆ ಕಂಡುಬಂದನು.

ಆ ನಂತರದಲ್ಲಿ ಕೌಶಿಕ ಹಾಗೂ ಶಾಂಡಿಲಿ ಇವರುಗಳು ಅನೇಕ ವರ್ಷಗಳವರೆಗೆ ಸುಖ ಹಾಗೂ ಧಾರ್ಮಿಕ ಜೀವನವನ್ನು ನಡೆಸಿದರು.

(ಆಧಾರಗಳಿಂದ)

★



(10ನೇ ಪುಟದಿಂದ)

ಬಳಸಿರುವ 'ಜೇಯ' 'ವಿಶ್ವವಲ್ಲಭ' ಪದಗಳು ದಾಸರ ಶರಣತೆ, ಗಣಪತಿಯ ಒಡೆಯತನದಲ್ಲಿ ದಾಸ-ಭಗವಂತನಲ್ಲಿ ಸಮರ್ಪಣೆಯಾಗುತ್ತದೆ.

ಪಾರ್ವತಿಯನ್ನು ಸ್ತುತಿಸಿದ ಪ್ರಾರ್ಥನೆಯೊಂದರಲ್ಲಿ ಆಕೆಯನ್ನು ಕುರಿತು

ಖ್ಯಾತ ವೇದಾಗಮಾತೀತೆ ಸರ್ವರ
ಮನಃ।
ಪ್ರೀತೆ ಷಣ್ಮುಖ ವಿನಾಯಕರ॥
ಮಾತೆ ದನುಜಕುಲಭೀತೆ ತುಹಿನಗಿರಿ।
ಜಾತೆ ಕೊಡೆನಗೆ ಸನ್ಮತಿಯ॥

ವೇದ ಆಗಮಗಳಿಗೂ ನಿಲುಕದ, ಎಲ್ಲರೂ ಮನಃಪೂರ್ವಕವಾಗಿ ಸ್ತುತಿಸುವ ಪಾರ್ವತಿ ಷಣ್ಮುಖ-ವಿನಾಯಕರ ತಾಯಿ ಎಂಬುದಾಗಿ ತಿಳಿಸಿ, ಮಕ್ಕಳ ಶ್ರೇಷ್ಠತೆಯಿಂದ ತಾಯಿಯ ಹಿರಿಮೆಯನ್ನು ಗುರುತಿಸಿ ದಾಸರು ನಮಸ್ಕರಿಸುವುದನ್ನು ಗಮನಿಸಬಹುದಾಗಿದೆ.

ಕನಕದಾಸರು ಗಣೇಶನನ್ನು ಸ್ತುತಿಸಿದ ಕೀರ್ತನೆ, ಪದ್ಯಗಳು ಹೃದಯ ಸ್ಪರ್ಶಿಯಾಗಿದ್ದು, ಭಕ್ತಿ ಭಾವಗಳು ಪುಟಿದೇಳುವ ಸಮರ್ಪಣಾ ಭಾವದಲ್ಲಿ ಭಕ್ತ ಭಗವಂತನಲ್ಲಿ ಸೇರುವ ತತ್ತ್ವ ಅಡಗಿದೆ. ದಾಸರ ಸುಂದರವಾದ ಶಬ್ದಗಳ ಪದಗಳ ಲಾಲಿತ್ಯ ಪ್ರಾಸ-ಅನುಪ್ರಾಸಗಳಿಂದ ದೇಸಿಯ ಚೆಲುವಿನ ಸೊಬಗಿನಿಂದ ಗಣೇಶನನ್ನು ಅಲಂಕರಿಸಿ, ಭಕ್ತಿಯ ಕೀರ್ತನೆಗಳಿಂದ ಆರಾಧಿಸಿದ್ದಾರೆ.

"ಸತ್ಯವೆಯ ಜೇಯ ಕಾರುಣ್ಯ ಕಂಡು" ಅನುಗ್ರಹಿಸುವಂತೆ ಕನಕದಾಸರ ಆರ್ತಿಸಿ-ಸ್ತುತಿಸಿದ್ದಾರೆ. ಮಣ್ಣಿನಿಂದಲೆ ಹುಟ್ಟಿದ ಮಣ್ಣಿನ ಮಗ ಗಣಪನಿಗೆ – ಈ ಮಣ್ಣಿನ ಮಕ್ಕಳ ದೇಸಿಯ ಚೆಲುವಿ ಕೀರ್ತನೆ ಪ್ರಿಯವಾಗುವುದರ ಸಂದೇಹವೆಲ್ಲಿದೆ?

☆

ಕೆಳದಿ ವೀರಪ್ಪನಾಯಕನಿಂದ ಪಡೆದರು. ಆದರೆ ಅಲ್ಲಿರುವ ವರಾಹಸ್ವಾಮಿ ಮತ್ತು ಗುಜ್ಜಾಡಿಯ ಗುಹೇಶ್ವರ ದೇವಾಲಯಗಳ ಉತ್ಪನ್ನವನ್ನು ಮುಟ್ಟಬಾರದೆಂದು ಈ ಒಪ್ಪಂದದಲ್ಲಿ ಶರ್ತವಿದ್ದಿತ್ತು. ಇಷ್ಟಲ್ಲದೇ ಇಲ್ಲಿನ ಜನರನ್ನು ಅವರವರ ಜಾತಿ-ನೀತಿಯ ಪ್ರಕಾರ ಜೀವಿಸಲು ಬಿಡಬೇಕು. ಆದರೆ ಪೋರ್ಚುಗೀಸರು ಈ ಪ್ರದೇಶದಲ್ಲಿ ಕ್ರೈಸ್ತಮಯವಾಗಿ ಮಾಡಲು ಪ್ರಯತ್ನಿಸಿದರು. ಇದರಿಂದಾಗಿ ಬಾಸ್ರಿ, ಪಡುಕೋಣೆ, ಮರವಂತೆಗಳಲ್ಲಿ ಭಾರಿ ಸಂಖ್ಯೆಯಲ್ಲಿ ಕ್ರೈಸ್ತರು ಬಂದು ನೆಲೆಸಿದರು. ಇದರಿಂದ ಕೆಳದಿಯ ನಾಯಕರಿಗೆ ಇಲ್ಲಿನ ಮಹಾವರಾಹಸ್ವಾಮಿ ಮತ್ತು ಗುಹೇಶ್ವರ ದೇವಾಲಯಗಳ ಪವಿತ್ರತೆಗೆ ಭಂಗ ಬರುವುದೆಂದು ತಿಳಿದು ಬಂದಿತು. ಈ ದೇವಾಲಯಗಳನ್ನು ತಿರುಗಿ ತಮ್ಮ ವಶಕ್ಕೆ ಮಾಡಿಕೊಂಡು ಇಲ್ಲಿನ ಧಾರ್ಮಿಕ ಕಟ್ಟಳೆಗಳು ಸಾಂಗವಾಗಿ ನಡೆಸಿಕೊಂಡು ಬರುವ ಉದ್ದೇಶದಿಂದ ಕೆಳದಿ ಶಿವಪ್ಪನಾಯಕನು ಪೋರ್ಚುಗೀಸರೊಡನೆ ಹೋರಾಡಿ ಅವರನ್ನು 1653 ರಲ್ಲಿ ಇಲ್ಲಿಂದ ಓಡಿಸಿದನು.

ಕೆಳದಿನಾಯಕರ ಆಳ್ವಿಕೆಯಲ್ಲಿ ಈ ದೇವಸ್ಥಾನ ಬಹಳ ಪ್ರಗತಿ ಹೊಂದಿತು. ವೀರಶೈವ ಪಂಥದವರಾದ ಕೆಳದಿ ನಾಯಕರು ಇಲ್ಲಿನ ಶ್ರೀ ವರಹಾಸ್ವಾಮಿ ದೇವರಲ್ಲಿ ಅತ್ಯಂತ ಭಕ್ತಿ ಹೊಂದಿದ್ದರು. ಈ ದೇವಾಲಯದ ಧಾರ್ಮಿಕ ಕಟ್ಟಳೆ ನಡೆದುಕೊಂಡು ಬರಲು ಈ ನಾಯಕರು ಸಹಾಯ ಮಾಡಿದ್ದರೆಂದು ಹಲಸುನಾಡಿನ ಒಂದು ಕಡತದಿಂದ ತಿಳಿದುಬರುತ್ತದೆ. ಕೆಳದಿ ನಾಯಕರ ಪತನದ ನಂತರ ಇಲ್ಲಿ ಆಳಿದ ಹೈದರಾಲಿ ಇಲ್ಲಿನ ದೇವಾಲಯದ ಧಾರ್ಮಿಕ ಕಟ್ಟಳೆಗಳನ್ನು ನಡೆಸಿಕೊಂಡು ಬರಲು ವಿಘ್ನವನ್ನುಂಟುಮಾಡಲಿಲ್ಲ. ಟಿಪ್ಪುವಿನ ಆಳ್ವಿಕೆಯಲ್ಲಿ ಇದು ಮುಂದುವರೆಯಿತು. ಟಿಪ್ಪುವಿನ ನಿಧನದ ನಂತರ ಅಧಿಕಾರಕ್ಕೆ ಬಂದ ಇಂಗ್ಲೀಷರು ಈ ದೇವಾಲಯದ ಭೂಸಂಪತ್ತಿನ ಮೇಲೆ ಹಿಡಿತವನ್ನು ತಂದರು. ಆದರೆ ಧಾರ್ಮಿಕ ಕಟ್ಟಳೆ ಯಥಾರೀತಿ ಮುಂದುವರಿದುಕೊಂಡು ಬಂದಿತು.



# ಕರ್ನಾಟಕದಲ್ಲಿ

# ಡಿ. ವಿ. ಜಿ. ಶತಮಾನೋತ್ಸವ ಸಮಾರೋಪ

ಕನ್ನಡದ ಖ್ಯಾತ ಕವಿ, ಚಿಂತನಶೀಲ, ಪತ್ರಕರ್ತ ಡಾ|| ಡಿ. ವಿ. ಗುಂಡಪ್ಪನವರ ಜನ್ಮ ಶತಾಬ್ದಿಯನ್ನು ಯಶಸ್ವಿಯಾಗಿ ಆಚರಿಸಿ, ಸಂಭ್ರಮ, ಉತ್ಸಾಹಗಳಿಂದ ಸಮಾರೋಪ ಸಮಾರಂಭವನ್ನು 8-10-88ರ ಶನಿವಾರ ಕೋಲಾರದ ಸರಕಾರೀ ಕಾಲೇಜಿನ ವಿಶ್ವೇಶ್ವರಯ್ಯ ಸಭಾಂಗಣದಲ್ಲಿ, ಪುಸ್ತಕ ಬಿಡುಗಡೆ, ವಿಚಾರಸಂಕಿರಣ, ಕವಿಗೋಷ್ಠಿ, ಗಮಕಗಳ ನಡುವೆ ಆಚರಿಸಲಾಯಿತು.

ಕೋಲಾರದ ಡಿ. ವಿ. ಜಿ. ಶತಮಾನೋತ್ಸವ ಸಮಿತಿಯ ಆಶ್ರಯದಲ್ಲಿ ನಡೆದ ಈ ಸಮಾರೋಪದಲ್ಲಿ 'ಡಿ. ವಿ. ಜಿ. ಸಮಗ್ರ ಕೃತಿ ಪರಿಶೀಲನೆ' ಪುಸ್ತಕವನ್ನು ಸಂತ ಹರಿಹರಾನಂದ ಸರಸ್ವತಿ ಅವರ ಅಧ್ಯಕ್ಷತೆಯಲ್ಲಿ ಗೋಖಲೆ ಸಾರ್ವಜನಿಕ ಸಂಸ್ಥೆಯ ಗೌರವಕಾರ್ಯದರ್ಶಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು– ಬಿಡುಗಡೆ ಮಾಡುತ್ತ ಡಿ. ವಿ. ಜಿ. ಶತಮಾನೋತ್ಸವ ನಾಡಿನಾದ್ಯಂತ ನಡೆದು ಬಂದದ್ದರ ಬಗ್ಗೆ ಸಂತಸವನ್ನು ವ್ಯಕ್ತಪಡಿಸಿ, ಹಲವು ಹನ್ನೊಂದು ಕಡೆಗಳಿಂದ ಲೇಖನಗಳನ್ನು ಸಂಪಾದಿಸಿ ಡಿ. ವಿ. ಜಿ. ಅವರ ಸಮಗ್ರ ಕೃತಿಗಳ ಬಗ್ಗೆ ಪರಿಶೀಲನೆ ಮಾಡುವ ಈ ಪುಸ್ತಕವನ್ನು ಬಿಡುಗಡೆ ಮಾಡಿರುವುದು ಅಭಿನಂದನಾರ್ಹವೆಂದರು.

ಸಂತ ಶ್ರೀ ಹರಿಹರಾನಂದ ಸರಸ್ವತಿ ಸ್ವಾಮಿಗಳು, 'ಹೃದಯ ವೈಶಾಲ್ಯದಿಂದ ಬದುಕಿದ್ದ ಹಿರಿಯಕವಿ ಡಿ. ವಿ. ಜಿ. ಅವರ ಆದರ್ಶಗಳನ್ನು ಜನತೆ ಪಾಲಿಸುವಂತೆ ಆಗಲಿ' ಎಂದು ಹಾರೈಸಿದರು.

ಪುಸ್ತಕವನ್ನು ಕುರಿತು ಮಾತನಾಡಿದ ಡಾ|| ಪಿ. ವಿ. ನಾರಾಯಣ ಅವರು ಡಿ. ವಿ ಜಿ. ಅವರ ಎಲ್ಲ ಕೃತಿಗಳೂ ದೊರೆಯುವುದೇ ಕಷ್ಟಸಾಧ್ಯವಾಗಿರುವಾಗ ಅವುಗಳನ್ನೆಲ್ಲ ಪರಿಶೀಲಿಸಿ ಪರಿಚಯ ವಿಮರ್ಶೆಗಳನ್ನು ನೀಡುವ ಈ ಕೃತಿಯನ್ನು ಜಗ ಆದರಿಸುವಂತೆ ಆಗಲಿ ಎಂದರು.

ಹಂಗಾಮಿ ಜಿಲ್ಲಾಧಿಕಾರಿ ಶ್ರೀ ಕೆ. ಎಸ್. ಸತ್ಯಮೂರ್ತಿ ಹಾಗೂ ಮುಳಬಾಗಿಲು ಶಾಸಕರಾದ ಶ್ರೀ ಆರ್. ವೆಂಕಟರಾಮಯ್ಯ ಅವರುಗಳೂ ಮಾತನಾಡಿದರು. ಪುಸ್ತಕದಲ್ಲಿನ ಲೇಖಕರಿಗೆ ನೆನಪಿನ ಕಾಣಿಕೆ ನೀಡಿದ ಕೋಲಾರದ ಶಾಸಕ ಶ್ರೀ ಕೆ. ಆರ್. ಶ್ರೀನಿವಾಸಯ್ಯ ಅವರು ವಿದ್ಯಾರ್ಥಿಗಳು ಡಿ. ವಿ. ಜಿ. ಅವರ ಪುಸ್ತಕಗಳನ್ನು ಓದುವಂತೆ ಆಗಲಿ ಎಂದರು.

ಶ್ರೀ ಕೆ. ಪ್ರಹ್ಲಾದರಾಯರು ಸ್ವಾಗತಿಸಿದ ಸಭೆಯನ್ನು ಶ್ರೀ ಎ. ಎಲ್. ರಾಮರಾಯರು ವಂದಿಸಿದರು. ಶ್ರೀ ಕೆ. ಆರ್. ನರಸಿಂಹನ್ ಅವರು ಕಾರ್ಯಕ್ರಮವನ್ನು ನಿರ್ದೇಶಿಸಿದರು.

ಡಿ. ವಿ. ಜಿ. ಸಂಸ್ಕೃತಿ–ಸಾಹಿತ್ಯ ವಿಚಾರ ಸಂಕಿರಣದಲ್ಲಿ ಡಿ. ವಿ. ಜಿ. ಅವರ ಸಂಸ್ಕೃತಿಯನ್ನು ಕುರಿತು ಪ್ರೊ|| ಎಲ್. ಎಸ್. ಶೇಷಗಿರಿರಾಯರೂ, ಡಿ. ವಿ. ಜಿ. ಅವರ ಮುಕ್ತಕಗಳನ್ನು ಕುರಿತು ಶ್ರೀ ಎಚ್. ಎಸ್. ಲಕ್ಷ್ಮೀನಾರಾಯಣ ಭಟ್ಟರೂ ಪಾಂಡಿತ್ಯ ಪೂರ್ಣವಾದ ವಿವರಗಳನ್ನು ಒದಗಿಸಿಕೊಟ್ಟರು. ಅಧ್ಯಕ್ಷತೆ ವಹಿಸಿದ್ದ ಜ್ಞಾನವೃದ್ಧ ಶ್ರೀ ಎಂ. ವಿ. ಸೀತಾರಾಮಯ್ಯನವರು ಡಿ. ವಿ. ಜಿ. ಅವರು ಸ್ವಸಾಮರ್ಥ್ಯದಿಂದ ವಿದ್ವಾಂಸರಾಗಿ ಸಂಸ್ಕೃತಿವಂತ ಆದರ್ಶ ಪುರುಷರಾದರು ಎಂಬುದನ್ನು ವಿವರಿಸಿದರು.

ಮಧ್ಯಾಹ್ನ ಕವಿಗೋಷ್ಠಿ ಡಾ|| ರಾಮಚಂದ್ರ ಶರ್ಮ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸರ್ವಶ್ರೀ ಸುಮತೀಂದ್ರ ನಾಡಿಗ, ಬಿ. ಆರ್. ಲಕ್ಷ್ಮಣರಾವ್, ಎಂ. ಎನ್. ವ್ಯಾಸರಾವ್, ಎನ್. ಎನ್. ಹರಿ, ರಮೇಶಚಂದ್ರ, ಶ್ರೀಮತಿಯರಾದ ಉತ್ತನೂರ ರಾಜಮ್ಮ, ಪ್ರತಿಭಾ, ಮುಂತಾದವರು ಭಾಗವಹಿಸಿದ್ದರು.

ಮಾಲೂರು ಶ್ರೀ ವೆಂಕಟಪ್ಪನವರಿಂದ ಗಮಕವೂ, ಶ್ರೀ ಕೈಪುಲಕ್ಷ್ಮಿನರಸಿಂಹ ಶಾಸ್ತ್ರಿ ಅವರಿಂದ ವ್ಯಾಖ್ಯಾನವೂ ನಡೆದ ಮೇಲೆ ಡಿ. ವಿ. ಜಿ. ಅವರ ಸಂಗೀತ ನಾಟಕ ಗರ್ದಭ ವಿಜಯವನ್ನು ಬೆಂಗಳೂರಿನ ಗೆಳೆಯರು ಅಭಿನಯಿಸಿದರು. ಕೋಲಾರದ ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರ ವತಿಯಿಂದ ಬೆಮೆಲ್‌ನವರು ಪಶ್ಚಾತ್ತಾಪ ನಾಟಕವನ್ನು ಪ್ರಸ್ತುತ ಪಡಿಸಿದರು.



# ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು 24—9—88

ಶ್ರೀ ಪದ್ಮಾವತೀ ಮಹಿಳಾ ಪಾಲಿಟೆಕ್ನಿಕ್‌ನ ಆಡಳಿತ ಮಂಡಳಿಯನ್ನು ಪುನಾರಚಿನಲು ತೀರ್ಮಾನಿಸಲಾಯಿತು. ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಆಡಳಿತ ಮಂಡಳಿಯ ಅಧ್ಯಕ್ಷರಾಗಿಯೂ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಉಪಾಧ್ಯಕ್ಷರಾಗಿಯೂ, ಎಸ್. ಪಿ. ಡಬ್ಲ್ಯೂ ಪಾಲಿಟೆಕ್ನಿಕ್‌ನ ಪ್ರಿನ್ಸಿಪಾಲರು ಕಾರ್ಯದರ್ಶಿಗಳಾಗಿಯೂ ಇರುವಂತೆ ಒಂದು ಸಮಿತಿಯನ್ನು ನಾಮಕರಣ ಮಾಡಲಾಯಿತು. ಆಂಧ್ರಪ್ರದೇಶದ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು, ತಿರುಪತಿಯ ಎಸ್. ವಿ. ಸರ್ಕಾರಿ ಪಾಲಿಟೆಕ್ನಿಕ್‌ನ ಪ್ರಾಂಶುಪಾಲರು, ತಿ. ತಿ. ದೇ. ಶಿಕ್ಷಣಾಧಿಕಾರಿ, ತಮಿಳುನಾಡು ತಾಂತ್ರಿಕ ಶಿಕ್ಷಣ ಇಲಾಖಾ ನಿರ್ದೇಶಕರು–ಶ್ರೀ ವಿ. ಶ್ರೀನಿವಾಸನ್, ಸಿಕಂದರಾಬಾದಿನ ಕೇಂದ್ರೀಯ ವಾಣಿಜ್ಯ ಕೇಂದ್ರದ ಪ್ರಾಂಶುಪಾಲರು ಶ್ರೀ ಸಿ. ಸೋಮರಾಜಾರಾವ್, ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸದಸ್ಯರುಗಳಾದ ಶ್ರೀ ಜಿ. ನಾಗಿರೆಡ್ಡಿ ಎಂ. ಎಲ್. ಎ. ಶ್ರೀಮತಿ ವರದಾ ಸರೋಜ ಎಂ. ಎಲ್. ಎ. ಅವರುಗಳನ್ನು ಈ ಸಮಿತಿಯ ಇತರ ಸದಸ್ಯರುಗಳನ್ನಾಗಿ ನಾಮಕರಣ ಮಾಡಲಾಯಿತು.

*  *  *  *

ತಿ. ತಿ. ದೇ. ಗಳಲ್ಲಿ ಅಗತ್ಯವಾದ ಅಕ್ಕಿ, ಬೇಳೆ, ಸಕ್ಕರೆ, ಕಲ್ಲುಸಕ್ಕರೆ ಕೇಸರಿ ಇತ್ಯಾದಿಗಳನ್ನು ಕೊಳ್ಳುವ ವ್ಯಾಪಾರ ಕಚೇರಿಯ ಗುದಾಮಿನ ಮೇಲ್ವಿಚಾರಣೆಗಾಗಿ ಸೂಪರಿಂಟೆಂಡೆಂಟ್ ಸ್ಥಾಯಿಯ ಒಂದು ಹುದ್ದೆಯನ್ನುಂಟುಮಾಡಲು ಸರ್ಕಾರಕ್ಕೆ ಈ ಬಗ್ಗೆ ಉದ್ಯೋಗನಿರ್ಮಿತಿಯ ರಿಯಾಯಿತಿತೋರಿಸಲು ಶಿಫಾರಸು ಮಾಡಲೂ ತೀರ್ಮಾನಿಸಲಾಯಿತು.

*  *  *  *

ತಿ. ತಿ. ದೇ. ಆರೋಗ್ಯ ಇಲಾಖಾ ಮೇಸ್ತ್ರಿಗಳ ಸಂಬಳದ ಸ್ಕೇಲ್ ಅನ್ನು ಉಪವನ ವಿಭಾಗದ ಮೇಸ್ತ್ರಿಗಳೊಂದಿಗೆ ಸಮಾನವಾಗಿಸಲು ತೀರ್ಮಾನಿಸಲಾಯಿತು.

*  *  *  *

ತಿ. ತಿ. ದೇ. ಗಳು ನಡೆಸುತ್ತಿರುವ ಸರಕಾರಿ ನೆರವಿಲ್ಲದ ಶಿಕ್ಷಣ ಸಂಸ್ಥೆಯ (ಆಯುರ್ವೇದ ಕಾಲೇಜು) ಉಪನ್ಯಾಸಕರಿಗೆ 1986 ನ ಹೊಸ ವೇತನ ಶ್ರೇಣಿಯನ್ನು ನೀಡಲು ತೀರ್ಮಾನಿಸಲಾಯಿತು.

*  *  *  *

ತಿ. ತಿ. ದೇ. ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಎಲ್ಲ ಶಿಕ್ಷಕರಿಗೂ 1986 ನ ಹೊಸ ವೇತನ ಶ್ರೇಣಿಯನ್ನು ನೀಡಲು ತೀರ್ಮಾನಿಸಲಾಯಿತು.

*  *  *  *

ಎಸ್. ವಿ. ಬಾಲಮಂದಿರದ ವಿದ್ಯಾರ್ಥಿ ಚಿ॥ ರಮೇಶ ಬಾಬು ಮಿದುಳು ಸಂಬಂಧಿ ರೋಗದಿಂದಾಗಿ ಅಂಧನಾದ ಕಾರಣ ಆತನನ್ನು ಮದರಾಸಿನ ಲಿಟಲ್ ಫ್ಲವರ್ ಕಾನ್ವೆಂಟ್ ಶಾಲೆಗೆ ಸೇರಿಸಿ ಆತನ ಶಿಕ್ಷಣವನ್ನು ಮುಂದುವರಿಸಬೇಕೆಂದು ತೀರ್ಮಾನಿಸಲಾಯಿತು.

*  *  *  *

ತಿರುಮಲೆಯಲ್ಲಿ ಧಾರ್ಮಿಕ ವಾತಾವರಣ ಪ್ರಸಾರಕ್ಕಾಗಿ ತಿರುಮಲೆಯ ಬಗ್ಗೆ 25 ಪುಟಗಳ ವರ್ಣ ಚಿತ್ರ ವಿವರ ಪುಸ್ತಿಕೆಯನ್ನು ಪ್ರಕಟಿಸಬೇಕೆಂದೂ, ಪ್ರತಿ ಕಾಟೇಜು/ರೂಮಿನಲ್ಲೂ ಭಗವದ್ಗೀತೆಯ ವಿವಿಧ ಭಾಷೆಗಳ (ಕನ್ನಡ/ತೆಲುಗು/ತಮಿಳು/ಆಂಗ್ಲ) ಪ್ರತಿಗಳನ್ನಿಟ್ಟು ಭಕ್ತರು ಬೇಕಿದ್ದಲ್ಲಿ ಕೊಂಡೊಯ್ಯಬಹುದೆಂದೂ ತಿಳಿಸುವ ಫಲಕಗಳನ್ನಿಡಬೇಕೆಂದೂ, ಪ್ರತಿ ಕಾಟೇಜು/ರೂಮಿನಲ್ಲಿ ಶ್ರೀನಿವಾಸ ಪದ್ಮಾವತಿಯರುಗಳ ಆಕರ್ಷಕ ಚಿತ್ರಗಳನ್ನು ಇಡಬೇಕೆಂದೂ ತೀರ್ಮಾನಿಸಲಾಯಿತು.

*  *  *  *

ಹಿಂದಿನ ವರ್ಷಗಳಂತೆಯೇ ಈ ವರ್ಷವೂ ತಿರುಪತಿಯ ಉಚಿತ ನೇತ್ರ ಚಿಕಿತ್ಸಾ ಶಿಬಿರವನ್ನು 20–1–89 ರಿಂದ ನಡೆಸಬೇಕೆಂದೂ, ಬರುವ ನೇತ್ರ ರೋಗಿಗಳ ಚಿಕಿತ್ಸೆಗಾಗಿ ಉಚಿತ ಊಟೋಪಚಾರ ಕನ್ನಡಕಗಳ ಏರ್ಪಾಡು ನಡೆಯಬೇಕೆಂದೂ ತೀರ್ಮಾನಿಸಲಾಯಿತು.

*  *  *  *

ಕಡಪ ಜಿಲ್ಲೆಯ ಸಿಂಹಾದ್ರಿ ಪುರದಲ್ಲಿ(ಮಂಡಲ್ ಕೇಂದ್ರ) ತಿ. ತಿ. ದೇ. ಕಲ್ಯಾಣಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

*  *  *  *

ತಿರುಪತಿಯ ಅಲಿಪಿರಿಯಿಂದ ಕೃಷಿ ಕಾಲೇಜಿನ ಹಿಂಭಾಗದ ಮೂಲಕ ಚಿತ್ತೂರು ರಸ್ತೆಯನ್ನು ತಲುಪುವಂತೆ ರಿಂಗ್ ರೋಡ್ ನಿರ್ಮಾಣಕ್ಕಾಗಿ ಕೃಷಿ ಕಾಲೇಜಿನ ದಕ್ಷಿಣದಲ್ಲಿ ಅದರ ಕೃಷಿಭೂಮಿಯ 40 ಅಡಿ ಅಗಲದ ಸ್ಥಳವನ್ನು, ಈಗಿರುವ 20 ಅಡಿ ಅಗಲದ ರಸ್ತೆಯೊಡನೆ (ಒಟ್ಟು 60 ಅಡಿ ಅಗಲ) ಪಡೆದು, ತಕ್ಕ ಪರಿಹಾರಧನವನ್ನು ಕಾಲೇಜಿಗೆ ನೀಡುತ್ತ ರಸ್ತೆಯ ಬದಿಯ ಕೃಷಿ ಭೂಮಿಗೆ ರಕ್ಷಣಾಬೇಲಿಯನ್ನು ಹಾಕಿ ಕೊಡಬೇಕೆಂದು ತೀರ್ಮಾನಿಸಲಾಯಿತು.

*  *  *  *

ಅನಂತಪುರ ಜಿಲ್ಲೆಯ ಪೆನುಕೊಂಡ ಉಪವಿಭಾಗದಲ್ಲಿ ಸ್ಥಳೀಯರು 50000 ರೂಗಳ ವಂತಿಗೆಯನ್ನು ಸಲ್ಲಿಸಿದ ನಂತರ ಕಲ್ಯಾಣಮಂಟಪ ನಿರ್ಮಿಸಲು ತೀರ್ಮಾನಿಸಲಾಯಿತು.

*  *  *  *

ತಿರುಮಲೆಯ ಮಧುಪುರಂ ತೋಟದಲ್ಲಿ ಹೊರಗಿನವರು ನೆಲೆಸಿದ್ದು ಅವರ ವಿರುದ್ಧ ಖಟ್ಲೆ ನಡೆಸಿ, ನ್ಯಾಯಾಲಯದಿಂದ ಹಕ್ಕುದಾರಿಯನ್ನು ಸ್ಥಾಪಿಸಿದ ನಂತರ, ಅವರನ್ನು ಬೇರೆಡೆಗೆ ಸಾಗಿಸಲು ಅವರಲ್ಲಿನ ಮನೆಯೊಡೆಯರಿಗೆ ಬಾಲಾಜಿನಗರದಲ್ಲಿ ಬಾಡಿಗೆಗೆ ಮನೆಗಳನ್ನು ನೀಡಬೇಕೆಂದೂ, ಅವರಿಗೆ ಕಾಟೆತೋಪುವಿನಲ್ಲಿ ಸ್ಥಳ ನೀಡಬೇಕೆಂದೂ ಗುಡಿಸಲ ನಿರ್ಮಾಣಕ್ಕೆ ನೆರವು ನೀಡಬೇಕೆಂದೂ ತೀರ್ಮಾನಿಸಲಾಯಿತು.

*  *  *  *

ತಿ. ತಿ. ದೇ. ಸಹಕಾರಿ ಮಾರಾಟ ಮಳಿಗೆಯ ನಿರ್ದೇಶಕರ ಸ್ಥಾನಕ್ಕೆ ಧರ್ಮಕರ್ತರ ಮಂಡಳಿಯ ಸದಸ್ಯ ಶ್ರೀ ಬಿ. ರಾಮಚಂದ್ರರಾಜು ಅವರ ಬದಲಿಗೆ ಶ್ರೀ ಸಿ. ಪ್ರಭಾಕರ ರೆಡ್ಡಿ ಅವರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

*  *  *  *

ತಿ. ತಿ. ದೇ. ಗಳ ಆಸ್ಪತ್ರೆಗಳಲ್ಲಿ (ತಿರುಮಲೆ ತಿರುಪತಿ, ತಿರುಚಾನೂರು) ದಂತ ಚಿಕಿತ್ಸಾ ತಜ್ಞರಾಗಿ ಕೆಲಸ ಮಾಡಲು ತಿರುಪತಿಯ ದಂತ ವೈದ್ಯ ಡಾ॥ ಕೆ. ಮನೋಹರನ್ ಅವರನ್ನು ವಿನಾಸಂಭಾವನೆಯ ಆಧಾರದಲ್ಲಿ ಒಂದು ವರ್ಷದ ಕಾಲ ನೇಮಿಸಲು ತೀರ್ಮಾನಿಸಲಾಯಿತು.

*  *  *  *

ಎಸ್. ವಿ. ಸಂಗೀತ ಹಾಗೂ ನೃತ್ಯಶಾಲೆಯಲ್ಲಿ ಹರಿಕಥಾ ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಿದ್ದು ನಿವೃತ್ತರಾದ ಖ್ಯಾತ ಹರಿಕಥಾ ವಿದ್ವಾಂಸೆ ಶ್ರೀಮತಿ ಆರ್. ದುರ್ಗಾಂಬ ಅವರನ್ನು ಅದೇ ಕೆಲಸದಲ್ಲಿ ಮತ್ತೂ ಒಂದು ವರ್ಷ ಮುಂದುವರಿಸಲು ತೀರ್ಮಾನಿಸಲಾಯಿತು.

*  *  *  *

## ಕರ್ನಾಟಕದಲ್ಲಿ

# ಡಿ. ವಿ. ಜಿ. ಶತಮಾನೋತ್ಸವ ಸಮಾರೋಪ

ಕನ್ನಡದ ಖ್ಯಾತ ಕವಿ, ಚಿಂತನಶೀಲ, ಪತ್ರಕರ್ತ ಡಾ|| ಡಿ. ವಿ. ಗುಂಡಪ್ಪನವರ ಜನ್ಮ ಶತಾಬ್ದಿಯನ್ನು ಯಶಸ್ವಿಯಾಗಿ ಆಚರಿಸಿ, ಸಂಭ್ರಮ, ಉತ್ಸಾಹಗಳಿಂದ ಸಮಾರೋಪ ಸಮಾರಂಭವನ್ನು 8-10-88ರ ಶನಿವಾರ ಕೋಲಾರದ ಸರಕಾರೀ ಕಾಲೇಜಿನ ವಿಶ್ವೇಶ್ವರಯ್ಯ ಸಭಾಂಗಣದಲ್ಲಿ, ಪುಸ್ತಕ ಬಿಡುಗಡೆ, ವಿಚಾರಸಂಕಿರಣ, ಕವಿಗೋಷ್ಠಿ, ಗಮಕಗಳ ನಡುವೆ ಆಚರಿಸಲಾಯಿತು.

ಕೋಲಾರದ ಡಿ. ವಿ. ಜಿ. ಶತಮಾನೋತ್ಸವ ಸಮಿತಿಯ ಆಶ್ರಯದಲ್ಲಿ ನಡೆದ ಈ ಸಮಾರೋಪದಲ್ಲಿ 'ಡಿ. ವಿ. ಜಿ. ಸಮಗ್ರ ಕೃತಿ ಪರಿಶೀಲನೆ' ಪುಸ್ತಕವನ್ನು ಸಂತ ಹರಿಹರಾನಂದ ಸರಸ್ವತಿ ಅವರ ಅಧ್ಯಕ್ಷತೆಯಲ್ಲಿ ಗೋಖಲೆ ಸಾರ್ವಜನಿಕ ಸಂಸ್ಥೆಯ ಗೌರವಕಾರ್ಯದರ್ಶಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು– ಬಿಡುಗಡೆ ಮಾಡುತ್ತ ಡಿ. ವಿ. ಜಿ. ಶತಮಾನೋತ್ಸವ ನಾಡಿನಾದ್ಯಂತ ನಡೆದು ಬಂದದ್ದರ ಬಗ್ಗೆ ಸಂತಸವನ್ನು ವ್ಯಕ್ತಪಡಿಸಿ, ಹಲವು ಹನ್ನೊಂದು ಕಡೆಗಳಿಂದ ಲೇಖನಗಳನ್ನು ಸಂಪಾದಿಸಿ ಡಿ. ವಿ. ಜಿ. ಅವರ ಸಮಗ್ರ ಕೃತಿಗಳ ಬಗ್ಗೆ ಪರಿಶೀಲನೆ ಮಾಡುವ ಈ ಪುಸ್ತಕವನ್ನು ಬಿಡುಗಡೆ ಮಾಡಿರುವುದು ಅಭಿನಂದನಾರ್ಹವೆಂದರು.

ಸಂತ ಶ್ರೀ ಹರಿಹರಾನಂದ ಸರಸ್ವತಿ ಸ್ವಾಮಿಗಳು, 'ಹೃದಯ ವೈಶಾಲ್ಯದಿಂದ ಬದುಕಿದ್ದ ಹಿರಿಯ ಕವಿ ಡಿ. ವಿ. ಜಿ. ಅವರ ಆದರ್ಶಗಳನ್ನು ಜನತೆ ಪಾಲಿಸುವಂತೆ ಆಗಲಿ' ಎಂದು ಹಾರೈಸಿದರು.

ಪುಸ್ತಕವನ್ನು ಕುರಿತು ಮಾತನಾಡಿದ ಡಾ|| ಪಿ. ವಿ. ನಾರಾಯಣ ಅವರು ಡಿ. ವಿ. ಜಿ. ಅವರ ಎಲ್ಲ ಕೃತಿಗಳೂ ದೊರೆಯುವುದೇ ಕಷ್ಟಸಾಧ್ಯವಾಗಿರುವಾಗ ಅವುಗಳನ್ನೆಲ್ಲ ಪರಿಶೀಲಿಸಿ ಪರಿಚಯ ವಿಮರ್ಶೆಗಳನ್ನು ನೀಡುವ ಈ ಕೃತಿಯನ್ನು ಜಗ ಆದರಿಸುವಂತೆ ಆಗಲಿ ಎಂದರು.

ಹಂಗಾಮಿ ಜಿಲ್ಲಾಧಿಕಾರಿ ಶ್ರೀ ಕೆ. ಎಸ್. ಸತ್ಯಮೂರ್ತಿ ಹಾಗೂ ಮುಳಬಾಗಿಲು ಶಾಸಕರಾದ ಶ್ರೀ ಆರ್. ವೆಂಕಟರಾಮಯ್ಯ ಅವರುಗಳೂ ಮಾತನಾಡಿದರು. ಪುಸ್ತಕದಲ್ಲಿನ ಲೇಖಕರಿಗೆ ನೆನಪಿನ ಕಾಣಿಕೆ ನೀಡಿದ ಕೋಲಾರದ ಶಾಸಕ ಶ್ರೀ ಕೆ. ಆರ್. ಶ್ರೀನಿವಾಸಯ್ಯ ಅವರು ವಿದ್ಯಾರ್ಥಿಗಳು ಡಿ. ವಿ. ಜಿ. ಅವರ ಪುಸ್ತಕಗಳನ್ನು ಓದುವಂತೆ ಆಗಲಿ ಎಂದರು.

ಶ್ರೀ ಕೆ. ಪ್ರಹ್ಲಾದರಾಯರು ಸ್ವಾಗತಿಸಿದ ಸಭೆಯನ್ನು ಶ್ರೀ ಎ. ಎಲ್. ರಾಮರಾಯರು ವಂದಿಸಿದರು. ಶ್ರೀ ಕೆ. ಆರ್. ನರಸಿಂಹನ್ ಅವರು ಕಾರ್ಯಕ್ರಮವನ್ನು ನಿರ್ದೇಶಿಸಿದರು.

ಡಿ. ವಿ. ಜಿ. ಸಂಸ್ಕೃತಿ–ಸಾಹಿತ್ಯ ವಿಚಾರ ಸಂಕಿರಣದಲ್ಲಿ ಡಿ. ವಿ. ಜಿ. ಅವರ ಸಂಸ್ಕೃತಿಯನ್ನು ಕುರಿತು ಪ್ರೊ|| ಎಲ್. ಎಸ್. ಶೇಷಗಿರಿರಾಯರೂ, ಡಿ. ವಿ. ಜಿ. ಅವರ ಮುಕ್ತಕಗಳನ್ನು ಕುರಿತು ಶ್ರೀ ಎಚ್. ಎಸ್. ಲಕ್ಷ್ಮೀನಾರಾಯಣ ಭಟ್ಟರೂ ಪಾಂಡಿತ್ಯ ಪೂರ್ಣವಾದ ವಿವರಗಳನ್ನು ಒದಗಿಸಿಕೊಟ್ಟರು. ಅಧ್ಯಕ್ಷತೆ ವಹಿಸಿದ್ದ ಜ್ಞಾನವೃದ್ಧ ಶ್ರೀ ಎಂ. ವಿ. ಸೀತಾರಾಮಯ್ಯನವರು ಡಿ. ವಿ. ಜಿ. ಅವರು ಸ್ವಸಾಮರ್ಥ್ಯದಿಂದ ವಿದ್ವಾಂಸರಾಗಿ ಸಂಸ್ಕೃತಿವಂತ ಆದರ್ಶ ಪುರುಷರಾದರು ಎಂಬುದನ್ನು ವಿವರಿಸಿದರು.

ಮಧ್ಯಾಹ್ನ ಕವಿಗೋಷ್ಠಿ ಡಾ|| ರಾಮಚಂದ್ರ ಶರ್ಮ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸರ್ವಶ್ರೀ ಸುಮತೀಂದ್ರ ನಾಡಿಗ, ಬಿ. ಆರ್. ಲಕ್ಷ್ಮಣರಾವ್, ಎಂ. ಎನ್. ವ್ಯಾಸರಾವ್, ಎನ್. ಎನ್. ಹರಿ, ರಮೇಶಚಂದ್ರ, ಶ್ರೀಮತಿಯರಾದ ಉತ್ತನೂರ ರಾಜಮ್ಮ, ಪ್ರತಿಭಾ, ಮುಂತಾದವರು ಭಾಗವಹಿಸಿದ್ದರು.

ಮಾಲೂರು ಶ್ರೀ ವೆಂಕಟಪ್ಪನವರಿಂದ ಗಮಕವೂ, ಶ್ರೀ ಕೈಪುಲಕ್ಷ್ಮೀನರಸಿಂಹ ಶಾಸ್ತ್ರಿ ಅವರಿಂದ ವ್ಯಾಖ್ಯಾನವೂ ನಡೆದ ಮೇಲೆ ಡಿ. ವಿ. ಜಿ. ಅವರ ಸಂಗೀತ ನಾಟಕ ಗರ್ದಭ ವಿಜಯವನ್ನು ಬೆಂಗಳೂರಿನ ಗೆಳೆಯರು ಅಭಿನಯಿಸಿದರು. ಕೋಲಾರದ ಸಂಸ್ಥೆ ಅಭಿವೃದ್ಧಿ ಇಲಾಖೆಯವರ ವತಿಯಿಂದ ಬೆಮೆಲ್‌ನವರು ಪಶ್ಚಾತ್ತಾಪ ನಾಟಕವನ್ನು ಪ್ರಸ್ತುತ ಪಡಿಸಿದರು.



# ವಾರ್ತಾಲಹರಿ

## ಯಶಸ್ವಿ ನವರಾತ್ರಿ ಬ್ರಹ್ಮೋತ್ಸವಗಳು

1988 ರ ನವರಾತ್ರಿ ಬ್ರಹ್ಮೋತ್ಸವಗಳು ತಿರುಮಲೆಯಲ್ಲಿ ಯಶಸ್ವಿಯಾಗಿ ನಡೆದವು. ಎಂದಿಗಿಂತ ಹೆಚ್ಚು ಉತ್ಸಾಹ ಸಂಭ್ರಮಗಳಿಂದ ಯಾತ್ರಿಕರು ಪ್ರತಿ ವಾಹನ ಸೇವೆಯಲ್ಲೂ ಪಾಲುಗೊಂಡಿದ್ದರು. ತಿ.ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ.ಎಚ್. ವೆಂಕಟಪತಿರಾಜು ಅವರ ನೇತೃತ್ವದಲ್ಲಿ ಹೆಚ್ಚಿನ ಸಂದಣಿಯ ಕನಿಷ್ಠ ಸೌಲಭ್ಯಗಳ ಪೂರೈಕೆಗಾಗಿ ವ್ಯಾಪಕವಾದ ವ್ಯವಸ್ಥಾ ಜಾಲ ನಿರ್ಮಾಣವಾಗಿದ್ದಿತು. ರೈಲ್ವೆ ಇಲಾಖೆಯವರು ವಾರ್ಷಿಕ ಬ್ರಹ್ಮೋತ್ಸವಗಳ ದಿನಗಳಲ್ಲಿಯಂತೆಯೇ ನವರಾತ್ರಿ ಸಮಯದಲ್ಲೂ ಸಹ ತಿರುಪತಿಗೆ ಆಗಮಿಸುವ ರೈಲುಗಾಡಿಗಳಿಗೆ ಹೆಚ್ಚಿನ ಭೋಗಿಗಳನ್ನು ಸೇರಿಸಿ ಹೆಚ್ಚು ಮಂದಿಯ ಪ್ರಯಾಣವನ್ನು ಸುಲಭಗೊಳಿಸಿದ್ದರು. ತಮಿಳುನಾಡು ಪ್ರಾಂತದ ವಿವಿಧ ನಗರಗಳಿಂದಲೂ ತಮಿಳುನಾಡು ಸರ್ಕಾರದ ವಿಶೇಷ ಬಸ್‌ಗಳು ತಿರುಪತಿಯನ್ನು ಸೇರಿದ್ದವು. ತಿ. ತಿ, ದೇ., ಗಳ ತೋಟಗಾರಿಕೆ ಇಲಾಖೆ ಹೊಸ ಹೂವಿನ ಅಲಂಕಾರಗಳು, ಭಕ್ತರ ಚಿತ್ರಗಳನ್ನು ಬಿಡಿಸಿ ತಿರುಮಲೆಯನ್ನು ಸಿಂಗಾರ ಗೊಳಿಸಿದ್ದರು. ವಿದ್ಯುತ್ ಇಲಾಖೆಯಮಂದಿ ಹೊಸ ಹೊಸ ವರ್ಣರಂಜಕ ಚಿತ್ರಗಳನ್ನು ವಿದ್ಯುದ್ದೀಪಗಳಲ್ಲಿ ಬಿಡಿಸಿ ಶೋಭೆಯನ್ನು ಹೆಚ್ಚುಗೊಳಿಸಿದ್ದರು. ಆರೋಗ್ಯ, ನೈರ್ಮಲ್ಯ ರಕ್ಷಣೆಗಾಗಿ ಹೆಚ್ಚಿನ ಸಿಬ್ಬಂದಿ ವ್ಯವಸ್ಥೆ ಆಗಿದ್ದಿತು. ಶಾಂತಿ ಭದ್ರತೆಗಳನ್ನು ಕಾಪಾಡಲು ಹೆಚ್ಚಿನ ಪೋಲೀಸು, ಗೃಹರಕ್ಷಕದಳದವರು, ಸ್ವಯಸೇವಕರು ಸಿದ್ಧರಿದ್ದರು. ದೇವಾಲಯದ ಮುಂದಿನ ಲಾಡು ಮಾರಾಟದ ಕೌಂಟರುಗಳಲ್ಲಿನ ಸಂದಣಿಯನ್ನು ತಪ್ಪಿಸಲು ತಿರುಮಲೆಯ ಬೇರೆ ಬೇರೆ ವಿಚಾರಣಾಕೇಂದ್ರಗಳಲ್ಲೂ ಲಾಡು ಮಾರಾಟವನ್ನು ಏರ್ಪಡಿಸಲಾಗಿತ್ತು.

ನವರಾತ್ರಿ ಬ್ರಹ್ಮೋತ್ಸವಗಳಲ್ಲಿನ ಒಟ್ಟು ಆದಾಯ 1 ಕೋಟಿ 6 ಲಕ್ಷ ಮುಟ್ಟಿದೆಯೆಂದು ವರದಿಯಾಗಿದೆ. ಹುಂಡಿಯಿಂದ 48. 28 ಲಕ್ಷ ರೂ. ಲಾಡು ಮಾರಾಟದಿಂದ 27. 55 ಲಕ್ಷರೂ, ಅರ್ಜಿತ ಸೇವೆಗಳಿಂದ 16. 77 ಲಕ್ಷರೂ ಹಾಗೂ ಪ್ರತ್ಯೇಕ ಪ್ರವೇಶದ ಟಿಕೆಟುಗಳಿಂದ 13. 24 ಲಕ್ಷರೂಗಳು ಬಂದವು. ಒಟ್ಟು, 3:5 ಲಕ್ಷಮಂದಿ ಯಾತ್ರಿಕರು ಬ್ರಹ್ಮೋತ್ಸವಕ್ಕೆ ಆಗಮಿಸಿದ್ದರೆಂದು ವರದಿಗಳು ತಿಳಿಸುತ್ತವೆ. ಗರುಡೋತ್ಸವದ ದಿನವೊಂದರಲ್ಲೇ 85000 ಮಂದಿ ತಿರುಮಲೆಗೆ ಆಗಮಿಸಿದ್ದರು. (15–10–88) ಬೆಳ್ಳಿಯ ರಥೋತ್ಸವ (18–10–88) ರಂದು ನಡೆಯಿತು. ವಿಶಾಲವಾದ ಎತ್ತರವಾದ ರಥದ ಬಹುದೂರ ಮುಟ್ಟುವ ಸರಪಳಿಗಳನ್ನು ಪುರುಷರೊಂದು ಕಡೆ ಸ್ತ್ರೀಯರೊಂದು ಕಡೆ ಸಂತಸದಿಂದ ಗೋವಿಂದ ನಾಮಸ್ಮರಣಮಾಡುತ್ತ ಎಳೆಯುತ್ತಿರುವಾಗ ವಿಜಯದಾಸರೆಂದ ಮಾತು 'ಭಕ್ತಜನ ಮುಂದೆ ನೀನವರ ಹಿಂದೆ' ಎಂಬುದು ಎದ್ದುಕಾಣುವಂತೆ ಆಯಿತು. ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ಡಿ. ಸೀತಾರಾಮಯ್ಯ, ಸದಸ್ಯರು ಶ್ರೀ ಐ ಎಲ್. ಎನ್. ಶಾಸ್ತ್ರಿ, ಶ್ರೀ ಎಲ್. ವಿ. ರಾಮಯ್ಯ, ಬಿ. ರಾಮಚಂದ್ರರಾಜು ಶ್ರೀ ಸಿ. ಎಚ್. ವೆಂಕಟಪತಿ ರಾಜು (ಕಾರ್ಯನಿರ್ವಹಣಾಧಿಕಾರಿ) ಮೊದಲಾದವರು ರಜತ ರಥೋತ್ಸವದಲ್ಲಿ ಪಾಲು ಗೊಂಡಿದ್ದರು.

ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಶ್ರೀ ಕೊಂಡಮಾಚಾರ್ಯರ ಭಗವದ್ಗೀತಾಪಠಣದಿಂದ ಆರಂಭವಾದ ಧರ್ಮಸಭಾ ಕಾರ್ಯಕ್ರಮಗಳು ಹೆಚ್ಚಿನ ಭಕ್ತರನ್ನು ಆಕರ್ಷಿಸಿದವು. ಶ್ರೀಮತಿಯರಾದ ಎಂ. ಎಲ್; ವಸಂತಕುಮಾರಿ, ವೇದವತಿ ಪ್ರಭಾಕರ್, ದ್ವಾರಂ ಮಂಗತಾಯಾರು, ಅವರುಗಳ ಸಂಗೀತ , ಶ್ರೀ ಚಿಟ್ಟಿಬಾಬು ಅವರ ವೀಣಾವಾದನ, ಶ್ರೀ ಯಲ್ಲಾ ವೆಂಕಟೇಶ್ವರರಾವ್ ಅವರ ಮೃದಂಗ ಗೋಷ್ಠಿ, ಶ್ರೀ ಮಲ್ಲಾದಿ ಚಂದ್ರಶೇಖರ ಅವರ ಪುರಾಣವಾಚನ, ಶ್ರೀ ಕೆ. ಸಚ್ಚಿದಾನಂದ ಶಾಸ್ತ್ರಿ, ಶ್ರೀ ದೂಸಿ ಬ್ಯಾನರ್ಜಿ, ಶ್ರೀಮತಿಯರಾದ ವೆಂಗಳ ಪ್ರಭಾವತಿ, ಕೆ. ಇಂದಿರಾಬಾಲ ಉಮಾ ಚೌದರಿ, ಅವರುಗಳ ಹರಿಕಥೆಗಳೂ ಆಕರ್ಷಿಸಿದವು. ಜೊತೆಗೇ ಅನ್ನಮಾಚಾರ್ಯ ಪ್ರಾಜೆಕ್ಟ್, ಸಂಗೀತ ನೃತ್ಯಶಾಲೆ, ದಾಸಸಾಹಿತ್ಯ ಪ್ರಾಜೆಕ್ಟ್ ಕಾರ್ಯಕ್ರಮಗಳೂ ರಸಪೂರ್ಣವಾಗಿದ್ದವು.

ಅನ್ನಮಾಚಾರ್ಯ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟ್‌ಗಳು ತಿರುಮಲೆಯ ನೂತನ ಸದಸ್ ಭವನದಲ್ಲಿ ಚಿತ್ರಪ್ರದರ್ಶನವನ್ನೂ ಏರ್ಪಡಿಸಿದ್ದವು. ತಿ.ತಿ.ದೇ. ಧಾರ್ಮಿಕ ಗ್ರಂಥಗಳ ಪ್ರದರ್ಶನ ರಿಯಾಯಿತಿ ದರಗಳಲ್ಲಿ ಮಾರಾಟಗಳೂ ಏರ್ಪಾಡಾಗಿದ್ದವು.

## ಉತ್ತಮ ಉಪನ್ಯಾಸಕ ಪ್ರಶಸ್ತಿ

ಆಂಧ್ರಪ್ರದೇಶ ಅವತರಣೋತ್ಸವದಲ್ಲಿನ ಉತ್ತಮ ಶಿಕ್ಷಕ ಸನ್ಮಾನಕ್ಕೆ ತಿ.ತಿ.ದೇ. ಗಳ ಶ್ರೀ ಗೋವಿಂದರಾಜಸ್ವಾಮಿ ಕಾಲೇಜಿನ ವಾಣಿಜ್ಯ ಶಾಸ್ತ್ರ ಪ್ರಾಚಾರ್ಯ ಶ್ರೀ ಪಿ. ಚಂದ್ರಶೇಖರ ನಾಯುಡು ಅವರು ಆಯ್ಕೆಯಾಗಿದ್ದಾರೆ. ಎನ್. ಸಿ.ಸಿ. ಅಧಿಕಾರಿಯಾಗಿ, ತಿ ತಿ ದೇ. ಗಳ ವಿದ್ಯಾಧಿಕಾರಿ ಆಗಿಯೂ ಸೇವೆ ಸಲ್ಲಿಸಿರುವ ಶ್ರೀಯುತರು ಉತ್ತಮ ಉಪಾಧ್ಯಾಯರೆಂದು ವಿದ್ಯಾರ್ಥಿಗಳಲ್ಲಿ ಜನಪ್ರಿಯರು.

## ತಿ.ತಿ.ದೇ. ಹೊಸ ಆರೋಗ್ಯಾಧಿಕಾರಿ

ತಿ.ತಿ.ದೇ. ಗಳಲ್ಲಿ ಹೊಸ ಆರೋಗ್ಯಾಧಿಕಾರಿಯಾಗಿ ಡಾ॥ ಪಿ. ನಾರಾಯಣ ಅವರು ಪದವಿಯನ್ನು ಸ್ವೀಕರಿಸಿದ್ದಾರೆ. ಅವರು ಈ ಮೊದಲು ಅನಕಾಪಲ್ಲಿಯ ಪುರಸಭಾ ಆರೋಗ್ಯಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದರು.

---

### ಧರ್ಮಕರ್ತರಮಂಡಳಿಯ ತೀರ್ಮಾನಗಳು

---

ತಿರುಮಲೆಯ ದೇವಾಲಯದ ಪರಕಾಮಣಿಯಲ್ಲಿ ಎರಡು ವರ್ಣ ದೂರದರ್ಶನ ಚಿತ್ರಗ್ರಾಹಕಗಳನ್ನೂ, ಹುಂಡಿ ಹಾಗೂ ಪಡಿಕಾವಲಿಯಲ್ಲಿ ಒಂದೊಂದು ಕಪ್ಪು ಬಿಳಿ ದೂರದರ್ಶನ ಚಿತ್ರಗ್ರಾಹಕಗಳನ್ನೂ ಸ್ಥಾಪಿಸಲು 6 ಲಕ್ಷರೂಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮತಿ ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳಲ್ಲಿ ವಿದ್ಯಾಧಿಕಾರಿಯ ಹುದ್ದೆ ಬಹುಕಾಲದಿಂದ ಖಾಲಿಯಿದ್ದು, ಶಿಕ್ಷಣಾಡಳಿತದ ತೊಂದರೆಗಳನ್ನು ತಪ್ಪಿಸಲು, ತಿ. ತಿ. ದೇ. ಶಿಕ್ಷಣ ಸಂಸ್ಥೆಗಳಲ್ಲಿನ ಪ್ರೊಫೆಸರ್‌ಗಳಲ್ಲಿ ಅರ್ಹರಾದವರನ್ನು ತಕ್ಷಣಿಕವಾಗಿ ಈ ಸ್ಥಾನಕ್ಕೆ ತರಬೇಕೆಂದು ನಿರ್ಣಯಿಸುತ್ತ, ಅರ್ಹವ್ಯಕ್ತಿಗಳ ಪಟ್ಟಿಯನ್ನು ತಯಾರಿಸಿ ಮುಂದಿನ ಮಂಡಳಿಯ ಸಭೆಗೆ ಸಲ್ಲಿಸಬೇಕೆಂದು ಕಾರ್ಯನಿರ್ವಹಣಾಧಿಕಾರಿಯನ್ನು ಕೋರಲು ತೀರ್ಮಾನಿಸಲಾಯಿತು.

## ಮುಂದಿನ ಸಂಚಿಕೆಯಲ್ಲಿ .... .... ...

### ಸಪ್ತಗಿರಿ. — ಡಿಸೆಂಬರ್ 1988

**ತಿರುಪ್ಪಾವೈ ರಹಸ್ಯಾರ್ಥ**
–ಕೆ. ದೊರೆಸ್ವಾಮಿ ಅಯ್ಯಂಗಾರ್

**ಸೂಡಾ ಸುಬ್ರಹ್ಮಣ್ಯಸ್ವಾಮಿ**
–ಸಿದ್ದಾಪುರ ವಾಸುದೇವಭಟ್

**ಕುರುಕ್ಷೇತ್ರ**
–ರಘುಸುತ

**ಬದರಿಕೇದಾರ**
–ಬಿ. ಎ. ಗುಡಿ

**ಶ್ರೀಗೀತೆ - ಕನ್ನಡದ ಕಾವ್ಯ**
–ಕೆ. ಜಗನ್ನಾಥಶಾಸ್ತ್ರಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
**ತಿ.ತಿ.ದೇ. ತಿರುಪತಿ.**

## ತಿಂಗಳಿನ ಮುಖ್ಯದಿನಗಳು

### ಡಿಸೆಂಬರ್ 1988

| | | |
|---|---|---|
| 5. | ಸೋಮವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಾರಂಭ. |
| 9. | ಶುಕ್ರವಾರ | ” ” ಗಜವಾಹನ. |
| 10. | ಶನಿವಾರ | ” ” ಗರುಡವಾಹನ. |
| 12. | ಸೋಮವಾರ | ” ” ರಥೋತ್ಸವ. |
| 14. | ಬುಧವಾರ | ಸುಬ್ರಹ್ಮಣ್ಯ ಷಷ್ಠಿ |
| 19. | ಸೋಮವಾರ | ವೈಕುಂಠ ಏಕಾದಶಿ, ಗೀತಾಜಯಂತಿ. |
| 20. | ಮಂಗಳವಾರ | ತಿರುಮಲೆ ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ. |
| 21. | ಬುಧವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 22. | ಗುರುವಾರ | ಶ್ರೀ ದತ್ತಾತ್ರೇಯ ಜಯಂತಿ. |
| 23. | ಶುಕ್ರವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ. |
| 24. | ಶನಿವಾರ | ಶ್ರೀ ಕಪಿಲೇಶ್ವರಸ್ವಾಮಿ ಆದ್ರಾದರ್ಶನೋತ್ಸವ. |

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಡಿಸೆಂಬರ್ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಒ. ಮಾಡಬೇಕೆಂದು ವಿನಂತಿ.

2, 3 15 24 29, 50 66 69 72, 73 77 79, 124 126, 128, 162, 169 201 203, 204, 205 206, 217, 261, 264, 267 279 280, 281, 284, 285 287, 288, 290 293, 295 343 382 386 391, 392, 398, 399 401, 405 408, 411, 423, 463, 530 565 568 569 570, 573, 574 580, 581, 582, 583, 690 833, 864, 865, 960, 961 1013, 1017 1077, 1090, 1092, 1099, 1102 1107, 1110 1113, 1126, 1127, 1128 1141, 1143, 1154, 1155, 1158, 1161, 1162 1163 1171 1456 1515 1716, 1719, 1727, 1733 1866, 1867. 1868, 1869 ರಿಂದ 1886, 1991.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**




Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

